# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)
ನಾಲ್ಕನೇ ಅಧಿವೇಶನ

## ಕಾರ್ಯಕಲಾಪಗಳ ಪಟ್ಟಿ

ಸೋಮವಾರ, ದಿನಾಂಕ 15ನೇ ಜುಲೈ, 2019
(ಸಮಯ: ಮಧ್ಯಾಹ್ನ 12.30 ಗಂಟೆಗೆ)

----

## 1. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಮೊದಲನೇ ಪಟ್ಟಿ

ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಮೊದಲನೇ ಪಟ್ಟಿ

## 2. ಕಾರ್ಯದರ್ಶಿಯವರ ವರದಿ

**ಕಾರ್ಯದರ್ಶಿಯವರು:–**

ಕಳೆದ ಅಧಿವೇಶನದಲ್ಲಿ ವರದಿಯನ್ನು ಒಪ್ಪಿಸಿದ ನಂತರ ರಾಷ್ಟ್ರಪತಿಗಳು / ರಾಜ್ಯಪಾಲರಿಂದ ಒಪ್ಪಿಗೆ ಪಡೆದ ವಿಧೇಯಕಗಳ ಪಟ್ಟಿಯನ್ನು ಸಭೆಯ ಮುಂದೆ ಮಂಡಿಸುವುದು.

## 3. ವರದಿಯನ್ನೊಪ್ಪಿಸುವುದು

**ಶ್ರೀ ಕೆ. ಶ್ರೀನಿವಾಸ ಗೌಡ** (ಅಧ್ಯಕ್ಷರು, ಅಂದಾಜುಗಳ ಸಮಿತಿ) ಅವರು 2018–19ನೇ ಸಾಲಿನ ಅಂದಾಜುಗಳ ಸಮಿತಿಯ ಮೊದಲನೇ ವರದಿಯನ್ನೊಪ್ಪಿಸುವುದು.

# 4. ವಿತ್ತೀಯ ಕಾರ್ಯಕಲಾಪಗಳು

2019-20ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಗಳ ಮಂಡನೆ ಹಾಗೂ ಚರ್ಚೆ.

| ಬೇಡಿಕೆ ಸಂಖ್ಯೆ | ಬೇಡಿಕೆಯ ಹೆಸರು |
|---|---|
| 03 | ಆರ್ಥಿಕ |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ |
| 24 | ಇಂಧನ |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ |
| 15 | ಮಾಹಿತಿ ತಂತ್ರಜ್ಞಾನ |
| 19 | ನಗರಾಭಿವೃದ್ಧಿ |
| 27 | ಕಾನೂನು |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |
| 20 | ಲೋಕೋಪಯೋಗಿ |
| 14 | ಕಂದಾಯ |
| 05 | ಒಳಾಡಳಿತ ಮತ್ತು ಸಾರಿಗೆ |
| 09 | ಸಹಕಾರ |
| 21 | ಜಲಸಂಪನ್ಮೂಲ |
| 25 | ಕನ್ನಡ ಮತ್ತು ಸಂಸ್ಕೃತಿ |
| 17 | ಶಿಕ್ಷಣ |
| 18 | ವಾಣಿಜ್ಯ ಮತ್ತು ಕೈಗಾರಿಕೆ |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ |
| 01 | ಕೃಷಿ ಮತ್ತು ತೋಟಗಾರಿಕೆ |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ |
| 10 | ಸಮಾಜ ಕಲ್ಯಾಣ |
| 16 | ವಸತಿ |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು |
| 13 | ಆಹಾರ ಮತ್ತು ನಾಗರೀಕ ಸರಬರಾಜು |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ |
| 23 | ಕಾರ್ಮಿಕ ಮತ್ತು ಕೌಶಲ್ಯ ಅಭಿವೃದ್ಧಿ |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ |

## 5. ಶಾಸನ ರಚನೆ

### I. ವಿಧೇಯಕಗಳನ್ನು ಮಂಡಿಸುವುದು

1. **ಶ್ರೀ ಆರ್.ವಿ. ದೇಶಪಾಂಡೆ (ಮಾನ್ಯ ಕಂದಾಯ ಸಚಿವರು) ಅವರು:–**

ಅ) 2019ನೇ ಸಾಲಿನ ಸರ್ವಜ್ಞ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

2. **ಡಾ: ಜಿ. ಪರಮೇಶ್ವರ್ (ಮಾನ್ಯ ಉಪ ಮುಖ್ಯಮಂತ್ರಿಗಳು) ಅವರು:–**

ಅ) 2019ನೇ ಸಾಲಿನ ಕರ್ನಾಟಕ ಪುರಸಭೆಗಳು ಮತ್ತು ಕೆಲವು ಇತರ ಕಾನೂನುಗಳು (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

3. **ಶ್ರೀ ಜಿ.ಟಿ. ದೇವೇಗೌಡ (ಮಾನ್ಯ ಉನ್ನತ ಶಿಕ್ಷಣ ಸಚಿವರು) ಅವರು:–**

ಅ) 2019ನೇ ಸಾಲಿನ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ಎರಡನೇ ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

4. **ಶ್ರೀ ಜಿ.ಟಿ. ದೇವೇಗೌಡ (ಮಾನ್ಯ ಉನ್ನತ ಶಿಕ್ಷಣ ಸಚಿವರು) ಅವರು:–**

ಅ) 2019ನೇ ಸಾಲಿನ ಕರ್ನಾಟಕ ಖಾಸಗಿ ವಿಶ್ವವಿದ್ಯಾಲಯಗಳ ವ್ಯವಸ್ಥಾಪನೆಯನ್ನು ತಾತ್ಕಾಲಿಕವಾಗಿ ವಶಕ್ಕೆ ತೆಗೆದುಕೊಳ್ಳುವ ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

## 6. ಗಮನ ಸೆಳೆಯುವ ಸೂಚನೆಗಳು

1) **ಶ್ರೀ ಎಸ್.ಎ. ರಾಮದಾಸ್ ಅವರು** – ಮೈಸೂರಿನ ಸರ್ಕಾರಿ ಕೆ.ಆರ್. ಆಸ್ಪತ್ರೆಯಲ್ಲಿ ವೆಂಟಿಲೇಟರ್‌ನ ತುರ್ತು ವ್ಯವಸ್ಥೆಯ ಕೊರತೆಯಿದ್ದು, ಇದರಿಂದ ರೋಗಿಗಳು ತೀವ್ರ ಸಂಕಷ್ಟ ಅನುಭವಿಸುತ್ತಿರುವುದರಿಂದ ಸದರಿ ಆಸ್ಪತ್ರೆಯನ್ನು ಉನ್ನತ ದರ್ಜೆಯ ಮಲ್ಟಿ ಸ್ಪೆಷಾಲಿಟಿ ಆಸ್ಪತ್ರೆಯನ್ನಾಗಿ ಪರಿವರ್ತಿಸುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

2) **ಶ್ರೀ ಸಿದ್ದು ಕೆ. ಸವದಿ ಅವರು** – ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ಅಡಿಯಲ್ಲಿ ನೇಯ್ಗೆ ಮಾಡುವ ನೇಕಾರರುಗಳಿಗೆ ಸಕಾಲದಲ್ಲಿ ನೂಲಿನ ಸರಬರಾಜಿಲ್ಲದೇ ನೇಕಾರರು ತೊಂದರೆ ಅನುಭವಿಸುತ್ತಿರುವುದರಿಂದ ಅವರುಗಳ ಸಾಲ ಮನ್ನಾ ಮಾಡುವ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

3) **ಶ್ರೀ ಸುನಿಲ್ ಬಿಳಿಯಾ ನಾಯ್ಕ ಅವರು** – ಭಟ್ಕಳ ತಾಲ್ಲೂಕಿನ ಮಾವಿನಕುರ್ವಾ ಬಂದರಿನಲ್ಲಿ ತುಂಬಿಕೊಂಡಿರುವ ಹೂಳನ್ನು ತೆಗೆಯದಿರುವುದರಿಂದ ಮೀನುಗಾರರು ಎದುರಿಸುತ್ತಿರುವ ಸಮಸ್ಯೆಯ ಬಗ್ಗೆ ಮಾನ್ಯ ಪಶು ಸಂಗೋಪನೆ ಮತ್ತು ಮೀನುಗಾರಿಕೆ ಸಚಿವರ ಗಮನ ಸೆಳೆಯುವುದು.

**ಎಂ.ಕೆ. ವಿಶಾಲಾಕ್ಷಿ**
**ಕಾರ್ಯದರ್ಶಿ(ಪ್ರ)**

---